ಕಲ್ಲನಗೌಡ ತಿಪ್ಪನಗೌಡ ಪಾಟೀಲ*

# ಇರಕಲ್ ಗಡ ಕೋಟೆ

ಇರಕಲ್ ಗಡ ರಾಯಚೂರ ಜಿಲ್ಲೆಯ ಕೊಪ್ಪಳ ತಾಲೂಕಿನ ಚಿಕ್ಕ ಹಳ್ಳಿ. ಕೊಪ್ಪಳದಿಂದ ಉತ್ತರಕ್ಕೆ ೧೫ ಕಿಲೊಮೀಟರ ದೂರದಲ್ಲಿದೆ. ದಾರಿಯ ಪಕ್ಕಕ್ಕೆ ಹೊಂದಿಕೊಂಡ ಇಪ್ಪತ್ತೆರಡು ಎಕರೆಯ ಬಿಳಿ ಕಪ್ಪು ಚಿಕ್ಕೆಗಳಿಂದ ಕೂಡಿದ ವಜ್ರ ಕಲ್ಲಿನ ಗುಡ್ಡದ ಮೇಲಿದೆ ಕೋಟೆ ಇದೇ. ಕೋಟೆಯು ಐದು ಎಕರೆ ವಿಸ್ತಾರವುಳ್ಳದಾಗಿದ್ದು ಒಳ ಪ್ರದೇಶದ ಕೋಟೆಯ ಗೋಡೆ ೪೦ ಅಡಿಯಿಂದ ೬೦ ಅಡಿಗಳಷ್ಟು ಎತ್ತರವಿದೆ. ಕನ್ನಡ ಅಕ್ಷರ'ಊ'ಆಕಾರವಾಗಿ ಆಯತಾಕಾರದ ಕಿಂಡಿಗಳನ್ನು ಬಿಟ್ಟು ಚೌಕಾಕಾರದ ಕಲ್ಲುಗಳಿಂದ ಕಟ್ಟಲ್ಪಟ್ಟಿದೆ. ದಾಖಲಾತೆಗಳಿಂದ ಇದು ೧೫ನೆ ಶತಮಾನದ ನಿರ್ಮಾಣವೆಂದು ಹೇಳಬಹುದು. ವಿಜಯ ನಗರದ ತುಳುವ ವಂಶದ ನರಸನಾಯಕನೆಂಬುವವನು ಕಟ್ಟಿದ, ಮುಂಡಗೈ ತಿಮ್ಮಪ್ಪನಾಯಕನಿಗೆ ಒಪ್ಪಿಸಿದನೆಂದು ತಿಳಿದು ಬರುತ್ತದೆ.[1]

ಕೋಟೆಯನ್ನು ಭದ್ರವಾಗಿ ಇಕ್ಕಟ್ಟಾದ ಜಾಗೆಯಲ್ಲಿ ಕಟ್ಟಲಾಗಿದೆ. ಪಶ್ಚಿಮ ದಿಕ್ಕಿನಲ್ಲಿ ಪ್ರವೇಶ ದ್ವಾರವಿದ್ದು. ಪೂರ್ವಕ್ಕೆ ಚಿಕ್ಕ ಗುಪ್ತದ್ವಾರವಿದೆ. ಕೋಟೆಯ ಕೆಳಗಡೆ ದೊಡ್ಡ ದೊಡ್ಡ ಬಂಡೆಗಲ್ಲುಗಳು ಇವೆ. ಗುಡ್ಡದ ಅಡಿಯಲ್ಲಿ ನೀರಿನ ಕಂದಕವಿದ್ದು ಇದರ ಸಲುವಾಗಿ ನಲ್ವತ್ತು ಎಕರೆ ಕೆರೆ ಇದೆ. ಇದರ ನೀರು ಸುತ್ತಲು ಗುಡ್ಡಕ್ಕೆ ಹೊಂದಿಕೊಂಡಿತ್ತೆಂದು ಹೇಳಬಹುದು.

ಕೋಟೆಯ ಒಳಭಾಗದಲ್ಲಿ ನೀರಿನ ಹೊಂಡವಿದ್ದು ಇದನ್ನು ಕುಡಿಯುವದರ ಸಲುವಾಗಿ ಮಾಡಿಸಿದೆ. ಆಳವಾಗಿರುವ ಇದಕ್ಕೆ ಇಳಿಯಲು ಪಾವಟಿಗೆಗಳಿವೆ. ಸುರಂಗದ ಮಾರ್ಗವೊಂದಿದ್ದು ಈಗ ಇದನ್ನು ಮುಚ್ಚಿರುತ್ತಾರೆ. ಅರಮನೆಯ ಅವಶೇಷವಿದ್ದು ಇದು ಕಲ್ಲಿನ ಕಟ್ಟಡವಾಗಿದ್ದು ಈಗ ಬಿದ್ದು ಹೋಗಿ ಅವಶೇಷಗಳು ಮಾತ್ರ ಉಳಿದಿರುತ್ತವೆ. ಇದು ಕೋಟೆಯ ಮಧ್ಯದಲ್ಲಿ ಎತ್ತರವಾಗಿದೆ. ಇಲ್ಲಿ ಗುಪ್ತ ಗುಹೆಯಿದ್ದು ಇದಕ್ಕೆ ಒಂದೆ ಕಲ್ಲಿನ ಚಪ್ಪಡಿಯ ಹೊದಿಕೆ ಇದ್ದು ಒಳಗೆ ಇನ್ನೂರು ಜನ ಕುಳಿತುಕೊಳ್ಳುವಷ್ಟು ವಿಶಾಲವಾಗಿದೆ. ಇದು ನಿಸರ್ಗ ನಿರ್ಮಿತವಾದುದಿರಬಹುದು. ಕೋಟೆಯ ಉತ್ತರದಲ್ಲಿ ಮದ್ದಿನ ಮನೆಯಿದ್ದು ಆರು ಅಡಿ ಅಗಲವಾಗಿ ಹನ್ನೆರಡು ಅಡಿ ಉದ್ದವಾಗಿ ಎಂಟು ಅಡಿ ಆಳವಾಗಿದ್ದು ಭದ್ರವಾದ ಕಲ್ಲಿನಿಂದ ಚೌಕಾಕಾರವಾಗಿ ಕಟ್ಟಿ ಗಚ್ಚಿನಿಂದ ಒಳಗೆ ಲೇಪನ ಮಾಡಿದೆ.

ಕೋಟೆಯ ಒಳಗೆ ಪೂರ್ವಕ್ಕೆ ಧಾನ್ಯ ಕಣಜವಿದು ಇದನ್ನು ಭೂಮಿಯೊಳಗೆ ದೊಡ್ಡ ತೆಗ್ಗು ತೋಡಿ ಮೇಲ್ಗಡೆ, ಚೌಕಾಕಾರವಾಗಿ ಕಲ್ಲಿನ ಕಟ್ಟಡ ಮಾಡಿ ಒಳಗೆ ಕಾಳುಗಳನ್ನು ಕೆಡದಂತೆ ಕಾಪಾಡಲು ಭದ್ರವಾಗಿ ಕಟ್ಟಿದೆ.

ಧಾನ್ಯ ಕಣಜ ಮತ್ತು ಮದ್ದಿನ ಮನೆ ಮಧ್ಯೆ ಶಸ್ತ್ರಕೊಠಡಿ ಮತ್ತು ಖಜಾನೆಯಿದ್ದು, ಇದೂ ಕೂಡ ಭೂಮಿಯೊಳಗೆ ಇದ್ದು ಒಳಗೆ ಹೋಗಲು ಚಿಕ್ಕ ಚಿಕ್ಕ ಪಾವಟಿಗೆಗಳು ಇವೆ.

---

* ಬೆಳಧಡಿ, ಗದಗ ತಾಲೂಕು, ಧಾರವಾಡ ಜಿಲ್ಲೆ.

1 ತರಕಲ ಕಟ್ಟಿ ಯಮನಪ್ಪ ಗೌಡರ ಹೇಳಿಕೆ.

ಅರಮನೆಯಿದ್ದ ಸ್ಥಳದ ಮುಂದೆ ಮಾರುತಿ ವಿಗ್ರಹವಿದ್ದು[2] ಇಲ್ಲಿ ಮೊದಲು ದೇವಸ್ಥಾನಗಳು ಇದ್ದ ಕುರುಹುಗಳು ಕಾಣುತ್ತವೆ. ಒಂದೇ ಕಲ್ಲಿನ ಬಂಡೆಯಲ್ಲಿ ವಿಗ್ರಹವನ್ನು ಕೆತ್ತಲಾಗಿದೆ. ಅಲ್ಲೊಲ್ಲಿ ಬಿದ್ದ ತೊಲೆ ಕಂಬಗಳ ಅವಶೇಷಗಳು ಇರುತ್ತವೆ. ಆನೆ ಚಿತ್ರ ಇರುವ ಎರಡು ಕಲ್ಲುಗಳು ಇದರ ಹತ್ತಿರ ಬಿದ್ದಿವೆ.[3] ಕೋಟೆಯ ಉತ್ತರ ಮತ್ತು ದಕ್ಷಿಣದ ಅಂಚುಗಳಲ್ಲಿ ಸೈನಿಕರು ಕುಳಿತು ಕೊಳ್ಳಲು ಚಿಕ್ಕ ಚಿಕ್ಕ ಗೂಡುಗಳಿವೆ. ಸೈನಿಕರ್ರು ವಿಶ್ರಾಂತಿ ಪಡೆಯಲು ಕಟ್ಟೆಗಳು ತೋಪು ಹಾರಿಸಲು ಜಾಲಂಧ್ರಗಳು ಇವೆ. ಊರಿನಲ್ಲಿ ಪ್ರಾಚೀನ ಅವಶೇಷಗಳಿವೆ ಶಿಲ್ಪಗಳು ಇವೆ. ಇವು ಜೈನ ತೀರ್ಥಂಕರ ಮೂರ್ತಿಗಳಾಗಿದ್ದು, ಇವುಗಳ ಅಡಿಯಲ್ಲಿ ಶಾಸನಗಳು ಇವೆ. ಅವು ಅಸ್ಪಷ್ಟವಾಗಿವೆ. ಊರಲ್ಲಿ ಒಂದು ಚಿಕ್ಕ ಮಾರುತಿ ದೇವಸ್ಥಾನವಿದ್ದು ಇದರ ಬಂಡೆಯಲ್ಲಿ ದಪ್ಪ ಅಕ್ಷರವಿರುವ ಶಾಸನ ಉಂಟು ಹಾಗೂ ಕೋಟೆ ಹತ್ತುವ ಮಾರ್ಗದಲ್ಲಿ ಒಂದು ವೀರಗಲ್ಲು ಒಂದು ಮಹಾಸತಿಯ ಕಲ್ಲು ವಿಗ್ರಹಗಳು ಇದ್ದು ವೀರಗಲ್ಲು ಮೂರು ಅಡಿ ಉದ್ದ ಎರಡು ಅಡಿ ಅಗಲ ಇದ್ದು ವೀರನು ಕೈಯಲ್ಲಿ ಭರ್ಜಿಯನ್ನು ಹಿಡಿದು ಕೊಂಡು ನಿಂತಿರುವನು. ಇವನ ಹೆಸರು ಸೋಮಲಿಂಗೇಶ್ವರ. ಇನ್ನು ಮಹಾಸತಿಯ ಕಲ್ಲು ಎರಡು ಅಡಿ ಉದ್ದ ಒಂದು ಅಡಿ ಅಗಲವಾಗಿದ್ದು ಕುಳಿತು ಕೊಂಡಿದ್ದಾಳೆ. ಇವಳ ಹೆಸರು ಚಾಡಿಮಲ್ಲಮ್ಮ ಇವರ ಮೆಲ್ಗಡೆ ಛತ್ರಿ ಆಕಾರವಾಗಿ ದೊಡ್ಡ ಬಂಡೆಗಲ್ಲು ಇರುತ್ತದೆ. ಮತ್ತು ಊರಿನ ಮಧ್ಯ ರಾಯಪ್ಪ ದೇಸಾಯಿ ಗುಡಿ ಇದೆ. ಒಳಗೆ ವೀರಗಲ್ಲು ಇದ್ದು ಇವನು ಕುದುರೆಯ ಮೇಲೆ ಸವಾರಿ ಮಾಡುತ್ತಾ ಇದ್ದಾನೆ. ಕೈಯಲ್ಲಿ ಭರ್ಚಿ ಡಾಲು ಹಿಡಿದಿದ್ದಾನೆ. ಇವನ ಹಿಂದೆ ಚ್ಯಾಮರ ಹಿಡಿದು ಸೇವಕ ಹೊರಟಿದ್ದಾನೆ. ಈ ವೀರಗಲ್ಲಿನ ಪೂಜೆಯನ್ನು ಈ ಊರಿನ ದೇವಾಯರ ಮನೆತನದವರು ಮಾಡುತ್ತಾರೆ. ಇವರು ಈ ವೀರಗಲ್ಲಿನ ವೀರನ ವಂಶದವರು.

ನಿಜಾಮ ಸೈನಾಧಿಕಾರಿ ಅಲ್ಲಾಮಗೀರ ಹಮ್ಮದನು ಈ ಕೋಟೆಯನ್ನು ಮೋಸದಿಂದ ಗೆದ್ದು ಕೊಂಡನೆಂದು ಹೇಳಲಾಗಿದೆ. ಆತನ ಹೆಸರಿನ ಹಳ್ಳಿ. ಈ ಕೋಟೆಯ ಪಕ್ಕದಲ್ಲಿ ಇದ್ದು ಅಲ್ಲಮಗಿರಿ ಎಂದು ಕರೆಯುತ್ತಾರೆ. ಮುಂದೆ ಹದಿನೇಳನೆಯ ಶತಮಾನಕ್ಕೆ ಮರಾಠಾ ಛತ್ರಪತಿ ಶಿವಾಜಿ ಸೈನಿಕರು ಗಜೇಂದ್ರ ಗಡದಿಂದ, ದಕ್ಷಿಣ ಮುಖವಾಗಿ ಬಂದು ಕೊಪ್ಪಳ ಕೋಟೆಯನ್ನು ಗೆದ್ದು ತಮ್ಮ ವಶಕ್ಕೆ ತೆಗೆದು ಕೊಂಡರು ಮುಂದೆ ಇದಕ್ಕೆ ಇರಕಲ್ ಗುಡ್ಡವೆಂದು ನಾಮಕರಣವಾಯಿತು.[4] ಮೊದಲು ಈ ಊರಿಗೆ ವೀರಕಲ್ಲು, ಇರಬಗಲ್ಲು, ಇರಕಲ್ಲು ಗಿರಿ, ಇರಕಲ್ಲು ಗಡಿಯಾಗಿ ಕೊನೆಗೆ ಇರಕಲ್ಲ ಗಢವಾಯಿತು. ಈ ಗುಡ್ಡದ ಪೂರ್ವಕ್ಕೆ ಕುಮ್ಮಟ ದುರ್ಗವಿದ್ದು ಇಲ್ಲಿ ಕುಮಾರರಾಮನೆಂಬ ವೀರನು ನೆಲಸಿದ್ದನೆಂದು ತಿಳಿದು ಬರುತ್ತದೆ. ಈ ಇರಕಲ್ ಗಡಕ್ಕೆ ಹೊಂದಿಕೊಂಡ ನಾಲ್ವತ್ತು ಎಕರೆ ಕೆರೆ ಇದೆ. ಈ ಕೆರೆ ನೀರಿನಿಂದ ತೋಟ ಪಟ್ಟಿಗಳು ಇದ್ದವೆಂದು ಊಹಿಸಲಾಗಿದೆ. ಊರಲ್ಲಿ ಗೋಪುರ ಬಸವಣ್ಣನ ಗುಡಿ ರುದ್ರಸ್ವಾಮಿ ಮಠ, ನಾಯಕ ಜನಾಂಗದ ಮನೆತನಗಳಿವೆ ಕೋಟೆಯ ಪಶ್ಚಿಮಕ್ಕೆ ದುರ್ಗಾಂಬಿಕಾ ದೇವಿಯ ಗುಡಿ ಬಿದ್ದು ನೆಲಸಮವಾಗಿ ದೀಪಸ್ತಂಭ ಮಾತ್ರ ಉಳಿದಿದೆ. ಇದರ ಸಮೀಪವೇ ಖಿನ್ನಾಳ ಎಂಬ ಗ್ರಾಮವು ಬಣ್ಣಕ್ಕೆ ಪ್ರಸಿದ್ಧಿಯಾಗಿದೆ. ಇಲ್ಲಿಂದ ಹತ್ತು ಕಿಲೊ ಮೀಟರ ದೂರದಲ್ಲಿ ಕನಕ ಗಿರಿ ಎಂಬ ಗ್ರಾಮವಿದ್ದು ಇದು ಪುರಾತನ ಕೋಟೆ ಗುಡಿ ಗೋಪುರಗಳು ಇದ್ದು ಚಿತ್ರ ಕಲೆಗೆ ಪ್ರಸಿದ್ಧಿ ಪಡೆದಿದೆ.

---

2 ನಾರಾಯಣಾಚಾರ್ಯ ಸಾಮಲಪುರ ಇವರು ಬರೆದ ಪುಸ್ತಕದ ಆಧಾರ.

3 ನಾಟಕ ಕರ್ತೃ ಕವಿ ಮಮಸಪ್ಪ ಗೌಡ್ರ ಇರಕಲ್ಲ ಇವರು ಬರೆದ ರಕ್ತಗತ್ತಿ ಎಂಬ ನಾಟಕದಲ್ಲಿ ಉಲ್ಲೇಖ.

4 ಕರ್ನಾಟಕ ರಾಜ್ಯಗ್ಯಾಸೆಟಿಯರ್ II ಪುಟ. ೩೭೨

[ನನ್ನ ಶೋಧನೆಯ ಕಾರ್ಯದಲ್ಲಿ ಸಹಾಯ ಸಲ್ಲಿಸಿದ ಇರಕಲ್ ಗಡಾದ ಶ್ರೀ ಹನಮಂತಪ್ಪ ತಲ್ಲೂರ ಇವರಿಗೂ ಹಾಗೂ ಬೆಳಧಡಿ. ಶ್ರೀ ಶಿವಪುತ್ರಯ್ಯ, ಬ. ಬರದೂರ ಮಠ ಇವರಿಗೆ ನಾನು ಚಿರಋಣಿಯಾಗಿದ್ದೇನೆ.]